# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 583
2. ಮಾನ್ಯ ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 10.03.2020
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮಾರುಕಟ್ಟೆ ಸುಧಾರಣಾ ನಿಧಿಯನ್ನು ಸಂಗ್ರಹಿಸಲಾಗುತ್ತಿದೆಯೇ; ಈ ನಿಧಿಯನ್ನು ಯಾವ ಯಾವ ವಿಷಯಗಳಿಗೆ ಉಪಯೋಗಿಸಲಾಗುತ್ತಿದೆ; | ಹೌದು, ಸಂಗ್ರಹಿಸಲಾಗುತ್ತಿದೆ.<br>ಕೃಷಿ ಉತ್ಪನ್ನಗಳ ವರ್ಗೀಕರಣ, ಪ್ರಮಾಣೀಕರಣ ಮತ್ತು ಗುಣಮಟ್ಟ ವಿಶ್ಲೇಷಣೆ, ಕೃಷಿ ಮಾರಾಟ ವಿಷಯದಲ್ಲಿ ತರಬೇತಿ, ಮಾರುಕಟ್ಟೆ ಪ್ರಾಂಗಣಕ್ಕೆ ಸಾಗಾಣಿಕೆ ಸಂಬಂಧ ಸೌಲಭ್ಯಗಳನ್ನು ಒದಗಿಸುವುದು ಹಾಗೂ ಕೃಷಿ ಮಾರಾಟ ವಿಷಯಕ್ಕೆ ಪೂರಕವಾದಂತಹ ಉದ್ದೇಶಗಳಿಗಾಗಿ, ಮಾರುಕಟ್ಟೆ ಸಮಿತಿಗಳ ಸುತ್ತಮುತ್ತಲಿನಲ್ಲಿ ಮತ್ತು ಸಂಬಂಧಿತ ಗೋದಾಮುಗಳಲ್ಲಿ ಐಟಿ ಇನ್‌ಫ್ರಾಸ್ಟ್ರಕ್ಚರ್, ಸಂಪರ್ಕ ಮತ್ತು ದತ್ತಾಂಶ ನಿರ್ವಹಣೆ ಮುಂತಾದವುಗಳಿಗಾಗಿ ಹಾಗೂ ಮಾರುಕಟ್ಟೆ ಸುಧಾರಣಾ ಮೇಲ್ವಿಚಾರಣಾ ಸಮಿತಿಯು ಕಾಲಕಾಲಕ್ಕೆ ನಿರ್ಧರಿಸಬಹುದಾದ ವಿಷಯಗಳಿಗೆ ಮಾರುಕಟ್ಟೆ ಸುಧಾರಣಾ ನಿಧಿಯನ್ನು ವಿನಿಯೋಗಿಸಲಾಗುತ್ತಿದೆ. |
| ಆ | ಮಾರುಕಟ್ಟೆ ಸುಧಾರಣಾ ನಿಧಿಯನ್ನು ಜಮಾ ಮಾಡಲು ಮಾರ್ಚ್, 2018ರ ವರೆಗೆ ಬ್ಯಾಂಕ್ ಖಾತೆ ತೆರೆಯದೇ ಇರುವುದರಿಂದ ರೂ.27.41 ಕೋಟಿಗಳ ಅವ್ಯವಹಾರವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಯಾವುದೇ ಅವ್ಯವಹಾರವಾಗಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲ. |
| ಇ | ಈ ಅವ್ಯವಹಾರಕ್ಕೆ ಯಾವ ಅಧಿಕಾರಿಯನ್ನು ಹೊಣೆಗಾರರನ್ನಾಗಿ ಮಾಡಲಾಗಿದೆ; ಅವರ ಮೇಲೆ ಕೈಗೊಂಡ ಕ್ರಮಗಳೇನು? | ಅನ್ವಯಿಸುವುದಿಲ್ಲ. |

**ಸಂಖ್ಯೆ: ಸಇ 122 ಎಂಆರ್‌ಇ 2020**

(ಎಸ್.ಟಿ.ಸೋಮಶೇಖರ್)
**ಸಹಕಾರ ಸಚಿವರು**